ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಹೊರಗುತ್ತಿಗೆ ನೌಕರರನ್ನು ಸೇವೆಯಿಂದ ಕೈಬಿಟ್ಟಿರುವ ಕುರಿತು

ಶ್ರೀ ಕೆ. ಹರೀಶ್ ಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು ) –

668 (826) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕೇಂದ್ರ ಸರ್ಕಾರದ ಸೂಚನೆ ಮೇರೆಗೆ ಕರ್ನಾಟಕ ಸರ್ಕಾರವು ಎ. ಪಿ. ಎಂ. ಸಿ. ಕಾಯ್ದೆ ತಿದ್ದುಪಡಿ ತಂದಿದ್ದು, ಹಲವು ವರ್ಷಗಳಿಂದ ಹೊರಗುತ್ತಿಗೆ ಆಧಾರದ ಮೇಲೆ ಕನಿಷ್ಠ ವೇತನದಡಿ ದುಡಿಯುತ್ತಿರುವ ನೌಕರರನ್ನು ಸೇವೆಯಿಂದ ಕೈಬಿಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ಕನಿಷ್ಠ ವೇತನದಡಿಯಲ್ಲಿ ದುಡಿಯುತ್ತಿರುವ ನೌಕರರನ್ನು ಏಕಾಏಕಿ ಕೆಲಸದಿಂದ ತೆಗೆದಿರುವುದರಿಂದ ಇವರನ್ನೇ ನಂಬಿರುವ ಕುಟುಂಬದವರು ಬೀದಿ ಪಾಲಾಗುತ್ತಿರುವುದರಿಂದ, ಸದರಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರನ್ನು ಮುಂದುವರೆಸುವ ಕುರಿತು ಸರ್ಕಾರದ ನಿಲುವೇನು?